# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1162

ಸದಸ್ಯರ ಹೆಸರು : ಶ್ರೀ ಕೆ. ಹರೀಶ್ ಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 15.03.2021

ಉತ್ತರಿಸುವ ಸಚಿವರು : ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ವಿದ್ಯಾರ್ಥಿಗಳಿಗೆ ಶಾಲೆಗಳನ್ನು ತೆರೆದು ಶಿಕ್ಷಣಕ್ಕೆ ಅಸ್ಪದ ನೀಡಿದ್ದರೂ ಹಾಜರಾತಿ ಕಡ್ಡಾಯಗೊಳಿಸದೇ ಆನ್‌ಲೈನ್ ತರಗತಿಯನ್ನು ಮುಂದುವರಿಸಿರುವುದರಿಂದ ಶಿಕ್ಷಕರ ಮೇಲೆ ಒತ್ತಡ ಹೆಚ್ಚಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಹಾಜರಾತಿ ಕಡ್ಡಾಯಗೊಳಿಸುವ ಯೋಜನೆ ಸರ್ಕಾರದ ಮುಂದಿದೆಯೇ? | ಹೌದು.<br>ಕೋವಿಡ್-19ರ ಹಿನ್ನಲೆಯಲ್ಲಿ ರಾಜ್ಯದಲ್ಲಿನ 1-5ನೇ ತರಗತಿ ಮಕ್ಕಳಿಗೆ ರೇಡಿಯೋ ಪಾಠಗಳು ಬಿತ್ತರಿಸಲಾಗುತ್ತಿದೆ ಹಾಗೂ ಎಲ್ಲಾ ಶಾಲೆಗಳಲ್ಲಿನ 6ರಿಂದ 12ನೇ ತರಗತಿ ವಿದ್ಯಾರ್ಥಿಗಳಿಗೆ ಶಾಲೆಯನ್ನು ಪೂರ್ಣ ಪ್ರಮಾಣದಲ್ಲಿ ಪ್ರಾರಂಭಿಸಲು(ಬೆಂಗಳೂರು ನಗರ, ಬಿ.ಬಿ.ಎಂ.ಪಿ ವ್ಯಾಪ್ತಿಯ ಹಾಗೂ ಕೇರಳ ಗಡಿಭಾಗದ ಶಾಲೆಗಳನ್ನು ಹೊರತುಪಡಿಸಿ) ಅನುಮತಿ ನೀಡಲಾಗಿದೆ.<br><br>ಆನ್‌ಲೈನ್ ತರಗತಿಯನ್ನು ಕಡ್ಡಾಯಗೊಳಿಸಲಾಗಿರುವುದಿಲ್ಲ. ವಿದ್ಯಾರ್ಥಿಗಳ ಹಾಜರಾತಿಯನ್ನು ಕಡ್ಡಾಯಗೊಳಿಸದೇ ಇರುವುದರಿಂದ ಶಾಲೆಗೆ ಹಾಜರಾಗಲು ಇಚ್ಚಿಸದೇ ಇರುವ ವಿದ್ಯಾರ್ಥಿಗಳಿಗೆ ಪರ್ಯಾಯವಾಗಿ ವಿದ್ಯಾಗಮ ಕಾರ್ಯಕ್ರಮವನ್ನು ಒದಗಿಸಲು ತಿಳಿಸಲಾಗಿದೆ ಹಾಗೂ 9-10 ನೇ ತರಗತಿಗೆ ಪೂರ್ಣ ಪ್ರಮಾಣದ ತರಗತಿಗಳನ್ನು ನಡೆಸಲು Standard Operating Procedure (SOP) ಪಾಲಿಸುವುದರ ಮೂಲಕ ಕ್ರಮ ವಹಿಸಲಾಗಿದೆ.<br><br>• 6ರಿಂದ 10ನೇ ತರಗತಿಗಳ ಪಠ್ಯ ವಿಷಯಕ್ಕೆ ಸಂಬಂಧಿಸಿದ ಇ-ಪಾಠಗಳನ್ನು 'ಮಕ್ಕಳವಾಣಿ **Youtube'** ಚಾನಲ್‌ನಲ್ಲಿ ಲಭ್ಯವಾಗುವಂತೆ ಕ್ರಮವಹಿಸಿದೆ.<br>• ಸಂವೇದ ಯೋಜನೆಯಡಿ ಬಿತ್ತರವಾದ ಎಲ್ಲಾ ಇ-ಪಾಠಗಳನ್ನು **DSERT** ಯ **Youtube** ಚಾನಲ್‌ನಲ್ಲಿ ಸಹ |

| | | |
|---|---|---|
| | | ಲಭ್ಯವಾಗುವಂತೆ ಕ್ರಮವಹಿಸಿದೆ.<br>• 8ರಿಂದ 10ನೇ ತರಗತಿಯ ಸಮಾಜ ವಿಜ್ಞಾನ ಆಂಗ್ಲ ಮಾಧ್ಯಮ ಪಾಠಗಳನ್ನು **DSERT** ಯ **Youtube** ಚಾನಲ್‌ನಲ್ಲಿ ಸಹ ಲಭ್ಯವಾಗುವಂತೆ ಕ್ರಮವಹಿಸಿದೆ.<br>• **NCERT** ಯಿಂದ ರೂಪಿತವಾದ 8ರಿಂದ 10ನೇ ತರಗತಿಗಳ ವಿಜ್ಞಾನ ಮತ್ತು ಗಣಿತ ವಿಷಯಗಳ ಆಂಗ್ಲ ಮಾಧ್ಯಮ ಇ-ಪಾಠಗಳು **DIKSHA** ವೆಬ್‌ಸೈಟ್ ಮತ್ತು ಪೋರ್ಟ್‌ಗಳಲ್ಲಿ ಲಭ್ಯವಿದ್ದು, ಈ ಬಗ್ಗೆ ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ (DSERT) ಇಲಾಖೆಯು ವ್ಯಾಪಕ ಪ್ರಚಾರ ನೀಡಿದೆ.<br>ಇಂದಿನವರೆಗೂ ಸುಮಾರು ಎಂಟು ಸಾವಿರ (8000) ಇ-ಸಂಪನ್ಮೂಲಗಳು, ಮಕ್ಕಳವಾಣಿ **Youtube** ಚಾನಲ್ ಮತ್ತು **DSERT Youtube** ಚಾನಲ್‌ನಲ್ಲಿ ಲಭ್ಯವಿರುತ್ತವೆ.<br>11 ಮತ್ತು 12 ನೇ ತರಗತಿಗಳಿಗೆ ವಿಡಿಯೋ ಪಾಠಗಳನ್ನು ಸಿದ್ಧಪಡಿಸಿ **Youtube** ಚಾನಲ್‌ನಲ್ಲಿ ಒದಗಿಸಲಾಗಿದೆ. ಈ ಎಲ್ಲಾ ಕಾರ್ಯಕ್ರಮಗಳು ಲಭ್ಯವಿರುವುದರಿಂದ ಶಿಕ್ಷಕರ ಮೇಲಿನ ಒತ್ತಡ ಕಡಿಮೆಯಾಗಲು ಅನುಕೂಲವಾಗುತ್ತದೆ.<br>ಕೋವಿಡ್-19ರ ಪರಿಸ್ಥಿತಿಯನ್ನು ಕಾಲಕಾಲಕ್ಕೆ ಅವಲೋಕಿಸಿ ವಿದ್ಯಾರ್ಥಿಗಳ ಹಾಜರಾತಿಯನ್ನು ಕಡ್ಡಾಯಗೊಳಿಸಲು ಕ್ರಮವಹಿಸಲಾಗುವುದು. |

ಇಪಿ 68 ಎಂ.ಹೆಚ್.ಟಿ 2021

(ಎಸ್. ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು